ಲಿಖಿತ ಮೂಲಕ ಉತ್ತರಿಸುವ

# ಕರ್ನಾಟಕ ವಿಧಾನ ಪರಿಷತ್ತು

## ನೂರ ಮೂವತ್ತೆಂಟನೆಯ ಅಧಿವೇಶನ

## ಶುಕ್ರವಾರ, ದಿನಾಂಕ 19ನೇ ಜುಲೈ, 2019

ಬೀದರ್ ನಗರಕ್ಕೆ ದಿನದ 24 ಘಂಟೆಗಳ ನೀರು ಪೂರೈಕೆ ನೀಡುವ ಕುರಿತು

ಶ್ರೀ ವಿಜಯ ಸಿಂಗ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

417 (566) ಮಾನ್ಯ ನಗರಾಭಿವೃದ್ಧಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೀದರ್ ನಗರದಲ್ಲಿ ದಿನದ 24 ಘಂಟೆ ಕುಡಿಯುವ ನೀರು ಪೂರೈಸುವ ಯೋಜನೆಯಡಿ ಎಷ್ಟು ವಾರ್ಡ್‌ಗಳಿಗೆ ನೀರು

ಸರಬರಾಜು ಮಾಡಲಾಗುತ್ತಿದೆ; ಎಷ್ಟು ದಿನಕೊಮ್ಮೆ ನೀರು ಕೊಡಲಾಗುತ್ತಿದೆ; ನೀರು ಪೂರೈಕೆ ಸಮರ್ಪಕವಾಗಿ ಆಗುತ್ತಿಲ್ಲದಿರುವ ಬಗ್ಗೆ ದೂರುಗಳು ಇವೆ; ಇದನ್ನು ಸುಧಾರಿಸಲು ಏನು ಕ್ರಮ ಕೈಗೊಳ್ಳಲಾಗಿದೆ; ಬೀದರ್ ನಗರದ ಎಲ್ಲಾ ವಾರ್ಡ್‌ಗಳಿಗೆ ದಿನದ 24 ಘಂಟೆ ನೀರು ಪೂರೈಕೆ ಆಗುವುದು ಯಾವಾಗ;

(ಆ) ಬೀದರ್ ನಗರದಲ್ಲಿ ಒಳಚರಂಡಿ ಕಾಮಗಾರಿ ಪೂರ್ಣವಾಗಿದೆಯೇ; ಪೂರ್ಣವಾಗದಿದ್ದರೆ ವಿಳಂಬಕ್ಕೆ ಕಾರಣವೇನು; ಎಷ್ಟು ದಿನಗಳಲ್ಲಿ ಪೂರ್ಣವಾಗಲಿದೆ ಕಾಮಗಾರಿಗೆ ಇದುವರೆಗೆ ಖರ್ಚಾಗಿರುವ ಅನುದಾನ ಎಷ್ಟು ?